ಅಂತರಂಗ 65

# ಪ್ರಾಯಶ್ಚಿತ್ತ

ಎಂ. ಗೋವಿಂದ ರಾವ್, ಎಂ. ಎ.

ಅಂತರಂಗ ಕಾರ್ಯಾಲಯ, ಉಡುಪಿ.

# ಪ್ರಾಯಶ್ಚಿತ್ತ

ಬರೆದವರು:-
ಎಂ. ಗೋವಿಂದರಾವ್, ಎಂ. ಎ.
(ಮದ್ರಾಸ್ ಯುನಿವರ್ಸಿಟಿ)

1954

0—2—0

ಅಂತರಂಗ ಕಾರ್ಯಾಲಯ, ಉಡುಪಿ.

# ಮನಸ್ಸಿಗೆ ಶಾಂತಿ ಬೇಕೇ?

**ಮೂಲ ಶ್ಲೋಕಗಳೊಂದಿಗೆ ತಿಳಿಗನ್ನಡದಲ್ಲಿ ಹೊಸಕೆರೆ ಚಿದಂಬರಯ್ಯನವರಿಂದ ಅನುವಾದಿಸಲ್ಪಟ್ಟ 400 ಪುಟಗಳಿಗೂ ಮಿಕ್ಕಿದ 'ಗೀತೆಯ ಕೈಗನ್ನಡಿ' ಎಂಬ ಭಗವದ್ಗೀತೆಯನ್ನು ಓದಿರಿ.**

*"ಬೇರೆ ಶಾಸ್ತ್ರಗಳನ್ನೆಷ್ಟೋದಿದರೇನು? ಗೀತೆಯನ್ನು ಚೆನ್ನಾಗಿ ಓದಬೇಕು

—ವರಾಹಪುರಾಣ



*"ಹಿಂದೂ ಧರ್ಮದ ಮತ್ತು ನೀತಿಶಾಸ್ತ್ರದ ಮೂಲತತ್ವವನ್ನು ತಿಳಿಯಬೇಕಾದರೆ ಮೊತ್ತಮೊದಲು ಈ ಅಪೂರ್ವ ಗ್ರಂಥವನ್ನು ಓದಬೇಕು."

—ಲೋಕಮಾನ್ಯ ತಿಲಕ.

*"ನನಗೆ ಸಂದೇಹಗಳು ಬಂದಾಗ, ನಿರಾಶೆಯು ನನ್ನ ಮುಂದೆ ನಿಂತಾಗ ಮತ್ತು ಆಕಾಶಮಂಡಲದಲ್ಲಿ ಯಾವ ಜ್ಯೋತಿಯೂ ಗೋಚರಿಸದಿರುವಾಗ ನಾನು ಗೀತೆಯನ್ನು ಓದುತ್ತೇನೆ. ಆಗ ನನ್ನ ಮನಸ್ಸಿಗೆ ಶಾಂತಿಯನ್ನು ಕೊಡುವಂತಹ ಶ್ಲೋಕವು ಒಂದಿಲ್ಲದಿದ್ದರೆ ಮತ್ತೊಂದು ಸಿಕ್ಕುವುದು."

—ಮಹಾತ್ಮಾ ಗಾಂಧಿ.

*"ಯಾವ ಸಮಾಜವೇ ಆಗಲಿ ಉನ್ನತಿಯ ಶಿಖರವನ್ನು ಹೊಂದಬೇಕಾದರೆ ಭಗವದ್ಗೀತೆಯ ಉಪದೇಶವು ಅತ್ಯುತ್ತಮವಾದದ್ದು."

—ವಾರೆನ್ ಹೇಸ್ಟಿಂಗ್ಸ್.

**ಎಂದ ಮೇಲೆ ಗೀತೆಯ ಮಹತ್ವದ ವಿಷಯ ಪ್ರತ್ಯೇಕ ಹೇಳಬೇಕಾದ್ದೇನೂ ಇಲ್ಲ. ಗೀತಾ ಧರ್ಮವು ಎಲ್ಲಾ ದೇಶದವರಿಗೂ ಎಲ್ಲಾ ಜಾತಿಯವರಿಗೂ ಅನುಸರಣೀಯವಾದುದರಿಂದ ಪ್ರಪಂಚದಲ್ಲಿ ಗೀತೆಗೆ ಮೊದಲನೆಯ ಸ್ಥಾನವಿದೆ.**

# ಗೀತೆಯ ಕೈಗನ್ನಡಿ

**ಬೆಲೆ: ಉತ್ತಮ ಪ್ರತಿ ರೂ. 0–12–0**

ಪ್ರತಿಗಳು ಪುಸ್ತಕ ವ್ಯಾಪಾರಿಗಳಲ್ಲೆಲ್ಲ ಸಿಗುತ್ತವೆ.

**ನವಯುಗ ಪ್ರೆಸ್, ಉಡುಪಿ.**

# ಪ್ರಾಯಶ್ಚಿತ್ತ

## ದೃಶ್ಯ ೧

[ಬೇಟೆಯ ಕೋಲಾಹಲದ ಶಬ್ದ. ಕುದುರೆಯ ಖುರಪುಟದ ಧ್ವನಿ. ನಾಯಿಗಳ ಬೊಗಳಾಟ. ಬಿಲ್ಲಿನ ಝೇಂಕೃತಿ. ಬೇಟೆಗಾರರ ಕೂಗು.]

ಒಬ್ಬ—ಎಬ್ಬಿಸಿ, ಎಬ್ಬಿಸಿ, ಮೃಗಗಳನ್ನು ಪೊದರುಗಳಿಂದೆಬ್ಬಿಸಿರಿ, ಸುತ್ತಲೂ ನಿಲ್ಲಿರಿ.

ಇನ್ನೊಬ್ಬ—ಸುತ್ತಾಗಿ ನಿಂತು ಹೊಡೆದರೆ ಅಂಬು ಅಂಬನ್ನು ತಾಗುವುದು, ಅಂಬು ದೇಹವನ್ನು ತಾಗುವುದು; ದೇಹ ಸೀಳಿ ಹೋಗುವುದು. ಒಡೆಯನ ಒಡಲೊಂದು ಮಡಿಯುವುದು.

ಮತ್ತೊಬ್ಬ—ನಾಟಿತು, ನಾನು ಬಿಟ್ಟ ಅಂಬು! ಕೊಂಬನು, ಹೊಡೆದರೆ ಕಾಲ ಕೊಳದಲ್ಲಿಯೇ. ಬಾವಿಯಲ್ಲಿಯೇ ಬೀಳುವುದು ಕಣ್ಣಿಗೆ ಗುರಿಯಿಟ್ಟರೆ ಬಾಣ ಬಾಯಲ್ಲಿ ತೂರುವುದು.

ಬೇರೊಬ್ಬ—ಸಾಕು, ಸಾಕು. ಕಾಡೆಬ್ಬಿಸಿ ತಲೆಯಿಂದ ಕಾಲವರೆಗೆ ಬೆವರು ಸುರಿಸುವುದು ಬೇಡ, ಅದು ಮಾತ್ರವಲ್ಲ. ಅರಸನ ಕರಚಮತ್ಕಾರವನ್ನೂ ನೋಡಬೇಕು.

ಮೊದಲನೆಯವ— ಅದೋ, ಅಲ್ಲಿ, ಆ ಗುಡ್ಡವನ್ನು ದಾಟಿ, ಮತ್ತೊಂದನ್ನು ಏರಿ, ಮರೆಯಾದನಲ್ಲವೇ ಮಹಾರಾಜನು! ಓಡಿರಿ. ಎಲ್ಲರೂ ಓಡಿರಿ, ಮಹಾರಾಜನು ಆಯಾಸಪಟ್ಟು, ಆಪತ್ತಿಗೊಳಗಾದರೆ, ನಾವು ಇದ್ದೇನು ಪ್ರಯೋಜನ? ತ್ವರೆ ಮಾಡಿರಿ.

ಸುಮಂತ್ರ—ಬೇಡ! ತಡೆಯಿರಿ. ಮಹಾರಾಜನ ಅಪ್ಪಣೆಯಾಗಿದೆ ಒಬ್ಬನೇ ಮೃಗಯಾ ವಿನೋದಕ್ಕೆ ಹೋಗಬೇಕೆಂದು ಜೊತೆಗೆ ಯಾರೂ ಬೇಡವಂತೆ! ಅವನು ಬರುವ ವರೆಗೂ ನೀವು ನಿಮ್ಮಿಚ್ಛಾನುಸಾರವಾಗಿ ಸುಖದಿಂದಿರಬಹುದು.

ಎಲ್ಲರೂ—ದಶರಥ ಮಹಾರಾಜನಿಗೆ ಜಯವಾಗಲಿ!

## ದೃಶ್ಯ ೨

[ಆಶ್ರಮ, ಋಷಿ, ಋಷಿಪತ್ನಿ, ತಾಂಡವ, ಮೂವರಿರುವರು.]

ಋಷಿಪತ್ನಿ—ಇದೆಂತಹ ಜೀವನ!...ಓಹೋಯ್, ನಿದ್ದೆ ಬಂದಿದೆಯೇ? ಹ್ಞಾ?

ಋಷಿ—ಹ್ಞೂಂ?

ಋ. ಪ.—ಅಲ್ಲ, ಏನೋ ವಿಚಾರಗಳು ಒಂದೊಂದಾಗಿ ಮನಸ್ಸಿಗೆ ಬರುತ್ತಿವೆ ನಮ್ಮ ಜೀವನದ ವಿಷಯವಾಗಿ.

ಋ—ಹಾ! ಅದನ್ನೇ ನಾನೂ ಯೋಚಿಸಿಕೊಂಡು ಮಲಗಿರುವುದು! ಮಾತಾಡುವುದಕ್ಕೆ ಯಾರೂ ಇಲ್ಲ? ನಾಡಾಗಿದ್ದರೆ?

ಋ. ಪ.—ನಾಡ ಜೀವನವನ್ನು ನಾವು ಅನುಭವಿಸಿ ಬಿಟ್ಟವರಲ್ಲವೇ? ಒಮ್ಮೆ ಬೇಡವೆಂದು ಬಿಟ್ಟದ್ದು ಮತ್ತೆ ಬೇಕೆಂದು ತೋರುವುದೇ?

ಋ—ಹೌದು, ಹೌದು! ನಾಡಿನ ಕಥೆಗಳನ್ನು ಯೋಚಿಸುವಾಗ ಈ ಕಾಡೇ ಬಹಳ ಒಳ್ಳೆಯದೆಂದು ತೋರುತ್ತದೆ. ಇಲ್ಲಿರುವ ವನ್ಯ ಜಂತುಗಳು ಮೋಸ ಮಾಡತಕ್ಕವುಗಳಲ್ಲ.

ಋ. ಪ.—ಬಾಲನಿಗೆ ನಿದ್ದೆ ಹತ್ತಿರುವುದೇ?

ಋ—ಹೌದು. ಅಂಧರೂ ಅಬಲರೂ ಆದ ನಮಗೆ ಈ ಅಂಧಕಾರಪೂರ್ಣವಾದ ಜೀವನದಲ್ಲಿ ಅವನೊಬ್ಬನೇ ಆಶಾಜ್ಯೋತಿಯಾಗಿದ್ದಾನೆ. ಲೋಕ ಜೀವನದ ಕುರಿತು, ಅದರ ಕಷ್ಟಕಾರ್ಪಣ್ಯಗಳ ಕುರಿತು, ಪಾಪ, ಈತನು ಏನನ್ನೂ ತಿಳಿಯನು.

ಋ. ಪ.—ಬೇಡ, ಅವನೀಗ ಒಂದನ್ನೂ ತಿಳಿಯುವುದು ಬೇಡ. ಮುಂದಕ್ಕೆ ಎಲ್ಲವೂ ತಾನಾಗಿಯೇ ತಿಳಿಯುವುದಷ್ಟೆ! ನಮ್ಮ ಮಗು ಈಗ ಅವುಗಳನ್ನು ತಿಳಿಯದೆಯೇ ಬೆಳೆಯಲಿ. ಅವನಿಗೆ ನಿದ್ದೆ ಬಂದಿದೆಯಷ್ಟೆ!

ಋ—ಹೌದು! ಅವನು ಸುಖವಾಗಿ ನಿದ್ರಿಸುತ್ತಿದ್ದಾನೆ. ಪಾಪ! ಎಷ್ಟು ಶ್ರದ್ಧೆಯಿಂದ ನಮ್ಮ ಸೇವೆಯನ್ನು ಮಾಡುತ್ತಿರುವನು? ಅವನಲ್ಲದಿರುತ್ತಿದ್ದರೆ ನಮ್ಮ ಗತಿಯೇನಾಗುತ್ತಿತ್ತು!

ಋ. ಪ.—ನಾನೂ ಅದನ್ನೇ ಹೇಳುವುದು. ಎಷ್ಟು ಸೇವೆ ಮಾಡಿದರೂ ಅವನಿಗೆ ಬೇಸರವಿಲ್ಲ; ಆಯಾಸವಿಲ್ಲ. ಅವನಿಗೋಸ್ಕರವಾಗಿಯಲ್ಲವೇ ನಾವೀ ಜೀವವನ್ನು ಹಿಡಿದುಕೊಂಡಿರುವುದು. ಪಾಪ! ಕಾವಡಿಯಲ್ಲಿ ನಮ್ಮನ್ನು ಹೊತ್ತುಕೊಂಡು ತೀರ್ಥಾಟನೆ ಮಾಡುವಾಗ ನಮ್ಮ ಬಾಲನಿಗೆ ಎಷ್ಟು ಪ್ರಯಾಸವಾಗಿರಬೇಕು!

ಋ—ನನಗೂ ಹಾಗೆನಿಸುತ್ತದೆ. ಅದಕ್ಕಾಗಿಯೇ ಕಾಶೀಯಾತ್ರೆ ಮಾಡುವ ಮೊದಲು ಇಲ್ಲಿ ಸ್ವಲ್ಪ ದಿನವಿದ್ದು ಹೋಗಬಹುದೆಂದು ನಾನು ಹೇಳಿದ್ದು. ಅವನು ಒಪ್ಪಿಯೇ ಬಿಟ್ಟ.

ಋ. ಪ.—ಒಪ್ಪದಿರುವನೇ? ಇದು ವರೆಗಾದರೂ ನಾವು ಹೇಳಿದುದಕ್ಕೆ ಅವನು ಪ್ರತಿ ಹೇಳಿದುದುಂಟೇ?

ಋ—ಆದಿರಲಿ! ಅವನು ನೀರಿನ ಕೊಡವನ್ನೆಲ್ಲಿಟ್ಟಿರುವನ್ನು? ದಾಹದಿಂದ ಗಂಟಲು ಸುಡುತ್ತಿದೆ. ಸ್ವಲ್ಪ ನೀರು ಕುಡಿಯಬಹುದಿತ್ತು.

ಋ. ಪ—ನನಗೂ ದಾಹವಾಗುತ್ತದೆ ಅವನನ್ನೆಬ್ಬಿಸಿರಿ. ನಮ್ಮಿಬ್ಬರಿಗೂ ಅವನು ನೀರನ್ನು ಕೊಟ್ಟು ಮಲಗಲಿ!

ಋ—ಛೆ! ಬೇಡ! ನೀರು ಕುಡಿಯದೆ ಸತ್ತರೂ ಚಿಂತೆಯಿಲ್ಲ. ಇಷ್ಟು ಸುಖವಾಗಿ ನಿದ್ರಿಸುವ ಆತನನ್ನು ಎಬ್ಬಿಸುವುದು ಸರಿಯಲ್ಲ! ನಾನೇ ತಿವಳಿಕೊಂಡು ಹೋಗಿ ನೋಡುವೆನು, ನೀರೆಲ್ಲಿದೆಯೆಂದು! (ಹೋಗಿ ಕೊಡವನ್ನೆಡವಿ ಬೀಳುವನು, ಕೊಡವೊಡೆದು ನೀರೆಲ್ಲ ಚೆಲ್ಲಿ ಹೋಗುವುದು.)

ತಾಂಡವ—ಹಾ! ಅಮ್ಮಾ, ಅಪ್ಪಾ, ಹಾ! ಹಾ! ಹಿಡಿಯಿತು ಹಿಡಿಯಿತು!

ಇಬ್ಬರೂ—ಮಗೂ, ತಾಂಡವ, ತಾಂಡವ, ತಾಂಡವ (ಎಚ್ಚರಿಸುವರು) ಮಗೂ ಏನಾಯಿತು ನಿನಗೆ? ಹೆದರಿದೆಯಾ?

ತಾಂಡವ—ಅಮ್ಮ, ಅಪ್ಪ, ಅಮ್ಮನೆಲ್ಲಿ?

ಋ. ಪ.—ಮಗೂ, ನಾನಿಲ್ಲೇ ಹತ್ತಿರದಲ್ಲಿ ಇರುವೆನಲ್ಲಾ! ಏನಾಯಿತು ನಿನಗೆ?

ತಾಂಡವ—ಅಮ್ಮಾ, ನಾನೊಂದು ದುಃಸ್ವಪ್ನವನ್ನು ಕಂಡೆನು,

ಒಂದು ಕಾಡು ಹಂದಿಯು ಬಂದು ನನ್ನನ್ನು ಹಿಡಿಯಿತು. ಬಿಡಿಸಿ
ಕೊಳ್ಳುವುದಕ್ಕಾಗಿ ನಾನು ಅದರೊಡನೆ ಹೋರಾಡಿದೆನು. ಅದು ನನ್ನನ್ನು
ಹೊಳೆಯಲ್ಲಿ ತಳ್ಳಿಬಿಟ್ಟಿತು. ಇದರಿಂದ ನನ್ನ ಮೈಯೆಲ್ಲಾ ನನೆದು
ಹೋಯಿತು.

ಋ— ಮಗೂ, ಹಾಗಲ್ಲ. ನಾನು ಸ್ವಲ್ಪ ನೀರು ತೆಗೆಯಬೇಕೆಂದು
ಹೋಗಿ ಈ ಕೊಡದ ಮೇಲೆ ಬಿದ್ದುಬಿಟ್ಟೆ. ಅದು ಒಡೆದು ಹೋಯಿತು.
ಆ ಶಬ್ದವನ್ನು ಕೇಳಿ ನೀನು ಹೆದರಿರಬೇಕು. ಇದೋ, ನೀರೆಲ್ಲ ಚೆಲ್ಲಿ
ನಿನ್ನ ಮೇಲೆ ಬಿದ್ದಿರುವುದು.

ತಾಂಡವ ಹಾಗಾದರೆ ನೀವಿನ್ನೂ ಮಲಗಿರಲಿಲ್ಲವೇ? ಯಾಕೆ
ಅಪ್ಪನು ನೀರು ತೆಗೆಯಲಿಕ್ಕೆ ಹೋದದ್ದು. ನನ್ನನ್ನು ಎಬ್ಬಿಸಬಾರದಿತ್ತೇ?

ಋ. ಪ.— ಮಗೂ, ನಮಗೆ ದಾಹದಿಂದ ಗಂಟಲು ಒಣಗಿ
ಹೋಯಿತು. ನೀನು ಸುಖವಾಗಿ ನಿದ್ರಿಸುತ್ತಿದ್ದೆ. ನಿನ್ನನ್ನು ಎಚ್ಚರಿಸ
ಬಾರದೆಂದು ಅಪ್ಪ ನೀರು ತೆಗೆಯುವುದಕ್ಕೆ ಹೋದವರು ಬಿದ್ದು ಬಿಟ್ಟರು.

ತಾಂಡವ— ಇದೋ, ನಾನು ಕೊಡುತ್ತೇನೆ ನೀರು!

ಋ— ಇನ್ನೆಲ್ಲಿ? ಒಂದು ಬೊಟ್ಟು ನೀರಾದರೂ ಇಲ್ಲ. ಎಲ್ಲಾ ಚೆಲ್ಲಿ
ಹೋಯಿತು.

ತಾಂಡವ— ಅದರಿಂದೇನು? ಕೊಡ ತೆಗೆದುಕೊಂಡು ನಾನೇ
ಹೋಗಿ ಹೊಳೆಯಿಂದ ನೀರನ್ನು ತರುವೆನು ಆಗದೇ?

ಋ— ಇದ್ದ ಒಂದು ಕೊಡ ಚೂರು ಚೂರಾಯಿತು. ಇನ್ನು
ನಮಗೆ ನೀರಿನ ಆಶೆಯಿಲ್ಲ.

ತಾಂಡವ ಅಪ್ಪಾ ಹಾಗೆನ್ನಬೇಡಿ. ನನ್ನಲ್ಲಿ ಒಂದು ಚರ್ಮದ
ಚೀಲವಿದೆ. ಅದರಲ್ಲಿ ನೀರನ್ನು ತರುವೆನು, ಆಗದೇ?

ಋ. ಪ. – ಬೇಡ, ಮಗು, ಬೇಡ! ನಾವು ಗಂಟಲೊಣಗಿ
ಸತ್ತರೂ ಚಿಂತೆಯಿಲ್ಲ. ಈ ಮಧ್ಯ ರಾತ್ರಿಯಲ್ಲಿ ನಿನ್ನನ್ನು ಹೊಳೆಯ
ಬಳಿಗೆ ಕಳುಹಿಸಿ ಕೊಡಲಾರೆವು. (ನಡುರಾತ್ರಿಯ ಕೋಳಿ ಕೂಗುವ ಶಬ್ದ)

ಋ—ಇದೋ, ಅರ್ಧ ರಾತ್ರಿಯ ಕೋಳಿ ಕೂಗುವ ಶಬ್ದ ಕೇಳಿ
ಸುತ್ತಿರುವುದು. ಹೊತ್ತು ಅಕಾಲವಾಯಿತು. ದುಷ್ಟ ಜಂತುಗಳುಳ್ಳ

ಕಾಡು ಕಗ್ಗತ್ತಲೆ ಎಲ್ಲೆಲ್ಲಿಯೂ ವ್ಯಾಪಿಸಿದೆ. ನೀನೆಲ್ಲಿಗೂ ಹೋಗ ಬೇಡ ಮಗು.

ತಾಂ.—ಅದು ಕೂಡದು. ತೃಷೆಯಿಂದ ಬಳಲುವ ಮಾತಾ ಪಿತೃಗಳಿಗೆ ನೀರು ಕೊಡದ ಮಗನು ಮಗನಲ್ಲವೆಂದು ನೀವೇ ನನ್ನೊ ಡನೆ ಹಲವು ಬಾರಿ ಹೇಳಿರುವಿರಲ್ಲವೇ? ನನಗೆ ಸ್ವಲ್ಪವೂ ಹೆದರಿಕೆಯಿಲ್ಲ. ನಾನು, ಇದೋ ನೀರನ್ನು ತಂದುಬಿಡುವೆನು. ಧೈರ್ಯವಾಗಿರ್ರಿ. ಹೋಗಲೇ?

ಋ. ಪ.— ಮಗನೇ, ಈ ಕರಿರುಳಲ್ಲಿ ನೀನು ಹೇಗೆ ಮಾರ್ಗವನ್ನು ತಿಳಿಯುವೆ?

ತಾಂ—ಅದೆಲ್ಲ ತಿಳಿಯುವೆನಮ್ಮ. ನೀನು ಭಾವಿಸುವಷ್ಟು ಕತ್ತಲೆ ಹೊರಗೆ ಇಲ್ಲ ಆಕಾಶವು ತಿಳಿಯುತ್ತಿದೆ. ಅಸ್ಪಷ್ಟವಾದ ಬೆಳ್ದಿಂಗಳು ವ್ಯಾಪಿಸಿರುತ್ತಿದೆ. ಈ ತಪ್ಪಲನ್ನು ದಾಟಿದರೆ ನದೀ ತೀರವು ತೋರುತ್ತದೆ. ದಾರಿ ಪರಿಚಯವುಳ್ಳದ್ದು. ನನ್ನನ್ನು ತಡೆಯಬೇಡಿ ಮಾತ್ರ!

ಋ—ದಾಹದಿಂದ ಗಂಟಲೇನೋ ಒಣಗಿದೆ. ಆದರೆ ನಿನ್ನ ನ್ನೊಬ್ಬನನ್ನೇ ಕಳುಹಿಸುವದಕ್ಕೆ ಮನಸ್ಸಿಲ್ಲ. ಸರಿ! ಒಂದು ಕೆಲಸ ಮಾಡು. ನನ್ನನ್ನು ಕರೆದುಕೊಂಡು ಹೋಗು. ನಾನೂ ಜೊತೆಯಲ್ಲಿ ಬರುವೆನು.

ತಾಂ—ಅದು ಬಹಳ ಕಷ್ಟ! ಅಮ್ಮ ಇಲ್ಲಿ ಒಬ್ಬಳೇ ಇರುವುದೇ? ನಿಮ್ಮನ್ನು ನದೀ ತೀರಕ್ಕೆ ಕರಕೊಂಡು ಹೋಗುವುದರೊಳಗಾಗಿ ನಾನು ನೀರನ್ನು ತಂದುಬಿಡಬಹುದು.

ಋ. ಪ.—ಸರಿ! ಹಾಗಾದರೆ ನಾವಿನ್ನು ನಿನ್ನನ್ನು ತಡೆಯುವುದಿಲ್ಲ. ಇಷ್ಟದಂತೆ ಮಾಡು. ಆದರೆ ದಾರಿಯಲ್ಲಿ ಜೋಕೆ!

## ದೃಶ್ಯ ೩

[ಕುದುರೆಗಳ ಖುರಪುಟನಿನಾದ, ನದಿಯ ಪ್ರವಾಹ ದಡ]

ದಶರಥ—ಸುಮಂತ್ರರೇ ಇನ್ನು ನೀವೂ ಸ್ವಲ್ಪ ವಿಶ್ರಾಂತಿ ಪಡೆಯ ಬಹುದು. ನಾನು ಈ ನದೀ ತೀರದಲ್ಲಿಯೇ ಸ್ವಲ್ಪ ಸಂಚರಿಸುವೆನು.

ಸುಮಂತ್ರ—ಮಹಾರಾಜ, ನೀನು ಈಗಲೇ ಬಳಲಿರುವೆಯಲ್ಲವೇ? ಸ್ವಲ್ಪ ವಿಶ್ರಮಿಸಿಕೊಂಡರೆ—

ದ—ಬೇಡ ಈ ಮೃಗಯಾ ವಿನೋದವೇ ನನಗೆ ವಿಶ್ರಾಂತಿ. ಇದಲ್ಲವೇ ರಾಜರಿಗೆ ವಿಹಿತವಾದುದು. ನನಗಂತೂ ಇದರಿಂದ ಬಹಳ ಪ್ರಯೋಜನವಿದೆ. ಇದು ವರೆಗೂ ಪುತ್ರಮುಖ ದರ್ಶನವನ್ನು ಮಾಡಲು ಭಾಗ್ಯವಿಲ್ಲದ ನನಗೆ ಈ ವಿನೋದವೂ ಇಲ್ಲದಿದ್ದರೆ—

ಸು—ಸರಿ! ಹಾಗೆಯೇ ಆಗಲಿ. ನೀನು ಸಂತೋಷಚಿತ್ತನಾಗಿರ ಬೇಕೆಂಬುದೇ ನನ್ನ ಅಪೇಕ್ಷೆ. ಆದರೆ ಒಬ್ಬನೇ ಸಂಚರಿಸುವುದು ಉಚಿತ ವಲ್ಲವೆಂದು—

ದ—ಹಾಗಾದರೆ, ನೀನೂ ನನ್ನೊಡನೆ ಬಾ! ನಿನ್ನ ಮಾತಿನಲ್ಲಿ ಅರ್ಥವುಂಟು. ಯೌವನ ಮದದಿಂದ ನಾನೇನಾದರೂ ಅಕಾರ್ಯ ವನ್ನು ಕೈಗೊಂಡರೆ, ತಡೆಯುವವನು ನೀನಲ್ಲದೆ ಮತ್ತಾರೂ ಇಲ್ಲ.

[ಕುದುರೆಯ ಖುರಪುಟಧ್ವನಿ, ಪಟ್ಟನೆ ನಿಲ್ಲುವುದು ನದಿಯ ಪ್ರವಾಹನಾದ, ಚೀಲದಲ್ಲಿ ನೀರು ತುಂಬುವ ಶಬ್ದ.]

ದ—ಹೋ! ಸಿಕ್ಕಿತು. ಕಾಡು ಹಂದಿಗಳುಳ್ಳ ಸ್ಥಳವೆಂದು ಮೊದಲೇ ಕೇಳಿದ್ದೆ. ಅವು ನಾಡನ್ನು ಹೊಕ್ಕು ಜನರನ್ನು ಪೀಡಿಸುವುದಾಗಿಯೂ ನನಗೆ ದೂರು ಬಂದಿದೆ. ಸರಿ, ಸರಿ! ಅದೋ ಅವುಗಳಲ್ಲೊಂದು ನೀರು ಕುಡಿಯುವುದಕ್ಕೆ ನದಿಗಿಳಿದಿರಬೇಕು.

ಸು—ಮಹಾರಾಜಾ! ಇನ್ನು ಮುಂದೆ ಜಾಗ್ರತೆಯಾಗಿರಬೇಕು. ಕಾಡು ಹಂದಿಯನ್ನು ಕೆಣಕಿ ಬಿಟ್ಟರೆ ಅಪಾಯವಾದೀತು.

ದ—ನನ್ನ ಕೈಯಲ್ಲಿ ನಾದ ಭೇದಿ ಶರವಿರುವಾಗ ಎಷ್ಟು ದೂರ ದಿಂದ ಬೇಕಾದರೂ ಅದನ್ನು ಬಿಡಬಹುದಲ್ಲವೇ? ಸುರಕ್ಷಿತವಾದ ಸ್ಥಾನ ದಲ್ಲಿ ನಾವು ನಿಂತರಾಯಿತು.

ಸು—ಅದೊ, ಆ ವರಾಹವು ನೀರು ಕುಡಿದು ದಡಕ್ಕೆ ಬರುವಂತಿದೆ, ನೀರಿನ ಅಲೆದಾಟ ಕೇಳುತ್ತಿದೆಯಲ್ಲವೇ?

ದ—ಆದ್ದರಿಂದ ಇನ್ನು ತಡಮಾಡಬಾರದು. ನಾದಭೇದಿಶರ ವನ್ನು ಪ್ರಯೋಗಿಸಿಬಿಡುವೆನು. ನಾವು ಈ ಬಂಡೆಯ ಶಿಖರದಲ್ಲಿ

ನಿಂತರೆ ಅದು ಪ್ರಾಣಸಂಕಟದಿಂದ ಓಡಿಬಂದರೂ ನನ್ನ ಮೇಲೆ ಬೀಳಲಾರದು, ಕುದುರೆಗಳನ್ನು ಬಿಟ್ಟುಬಿಡು.

(ಶರ ಹಾರುವ ಶಬ್ದ)

ತಾಂ—ಹಾ!....ಅಮ್ಮ....ಅಪ್ಪ....ಹಾ! ಹಾ! (ದೀನನಾದ)

ಸು—ಮಹಾರಾಜಾ! ಮೋಸವಾಯಿತು.

ದ—ಸುಮಂತ್ರರೇ, ಬೇಗ, ಬೇಗ, ಯಾರೋ ಆರ್ತನಾದ ಮಾಡುತ್ತಿರುವರು. (ಖುರಪುಟಧ್ವನಿ. ಆರ್ತನಾದ)

ಸು—ಅದೋ, ಅಲ್ಲಿ; ಅಲ್ಲಿಂದ ಕೂಗು ಕೇಳಿಸುವುದು.

ದ—ಶಾಂತಂ, ಪಾಪಂ ಒಬ್ಬ ತರುಣನ ಆರ್ತನಾದವಲ್ಲವೇ?

ತಾ—ಯಾರಾದರೂ ಓಡಿ ಬನ್ನಿ— ಪ್ರಾಣ ಸಂಕಟ. ಈ ಶರವನ್ನು ಎಳೆದು ತೆಗೆಯಿರಿ ಹಾ! ಅಮ್ಮಾ! ಅಪ್ಪಾ! ಯಾರೋ ನನ್ನನ್ನು ಕೊಂದರು.

ದ-ಮೋಸವಾಯಿತು. ಸುಮಂತ್ರರೇ, ಮೋಸವಾಯಿತು. ಸೂಕರದ ಮೇಲೆಸೆದಂಬು ಈತನಿಗೆ ತಾಗಿರುವುದು ಹಾ! ಹತವಿಧಿ!

ತಾಂ—ಈ ಬಾಣವನ್ನು ಹಿಡಿದೆಳೆಯಿರಿ. ತೃಷೆಯಿಂದ ಬಳಲಿರುವ ತಾಯ್ತಂದೆಗಳಿಗೆ ನೀರನ್ನು ಕೊಡಿರಿ.

ದ—ಸುಮಂತ್ರರೇ, ಬನ್ನಿ. ಈ ತರುಣನನ್ನು ಹಿಡಿಯಿರಿ. ನಾನು ಮೆಲ್ಲನೆ ಈ ಶರವನ್ನು ತೆಗೆಯುವೆನು.

ಸು—ಕುಮಾರ್, ಯಾರು ನೀನು? ಎಲ್ಲಿರುವರು ನಿನ್ನ ತಾಯ್ತಂದೆಗಳು?

ತಾಂ—ಈ ತಪ್ಪಲಲ್ಲಿನ ಆಶ್ರಮದಲ್ಲಿ ಅಂಧರಾದ ಅವರಿಗೆ ನೀರು ಕೊಂಡೊಯ್ಯುವುದಕ್ಕಾಗಿ ಬಂದೆ ನಾನು. ವಿಧಿ ಹೀಗಾಯಿತು. ಹಾ! ಅಮ್ಮ, ಅಪ್ಪ ಅವರು ನೀರಿಗಾಗಿ ಕಾದಿರಬಹುದು. ಬೇಗನೆ ಹೋಗಿ, ನೀರು ಕೊಡಿ.

ದ—ಅಯ್ಯೋ,! ನಾನೊಬ್ಬ ಮಹಾ ಪಾಪಿಯಾದೆನು. ಇದಕ್ಕೆ ಪ್ರಾಯಶ್ಚಿತ್ತವೇನು? ಕುಮಾರಾ ನಿನ್ನ ಸುಕುಮಾರ ಶರೀರಕ್ಕೆ ಶರವನ್ನೆಸೆದವನು ನಾನೇ! ಕಾಡು ಹಂದಿ ನೀರು ಕುಡಿಯುತ್ತಿರುವುದೆಂದು

ಭ್ರಮಿಸಿ ಬಾಣ ಬಿಟ್ಟೆನು ಅದು ಹೀಗಾಯಿತು. ನಾನು ಮಹಾ ಪಾಪಿ ಇದಕ್ಕೆ ಪ್ರಾಯಶ್ಚಿತ್ತವೇನು? ಅದನ್ನು ಮಾಡುವುದಕ್ಕೆ ಸಿದ್ಧನಿರುವೆನು ನನ್ನನ್ನು ಕ್ಷಮಿಸುವೆಯಾ?

ತಾಂ—ಅರಿಯದೆ ಮಾಡಿದುದು ಅಪರಾಧವಲ್ಲ. ನೀನು ಯಾರು?

ಸು—ಅಯೋಧ್ಯಾಧಿಪತಿ, ದಶರಥ ಮಹಾರಾಜ, ಕುಮಾರಾ, ಕಷ್ಟ ಕಷ್ಟ! ದುಷ್ಟ ಶಿಕ್ಷಣಕ್ಕಿದ್ದ ಶರ ಶಿಷ್ಟನಾಶನಕ್ಕಾಯಿತು!

ತಾಂ—ತಡ ಮಾಡಬೇಡಿ. ನನ್ನ ರಕ್ತವೆಲ್ಲ ಬರಿದಾಯಿತು ಪ್ರಾಣ ಹೋಗುತ್ತಿದೆ. ಅಮ್ಮ, ನಿನ್ನನ್ನು ಕಾಣುವ ಯೋಗವಿಲ್ಲವಿನ್ನು, ಮಹಾರಾಜ! ನನ್ನ ತಂದೆ ತಾಯಿಗಳನ್ನು ನೋಡಿ ಕೋ. ನಿಜ ಸಂಗತಿಯನ್ನು ಹೇಳವರಿಗೆ. ಅವರು-ಅವರು ನಿನ್ನನ್ನು ಕ್ಷಮಿಸುವರು. ಹಾ! ಅಮ್ಮ—ಅಪ್ಪ-ಪಾ!

ದ—ಸುಮಂತ್ರರೆ, ಎಲ್ಲಾ ಮುಗಿಯಿತು. ನಾನು ವಂಚಿತ ನಾದೆನು. ಹಾ! ಈ ಕುಸುಮ ಕೋಮಲ ಶರೀರದ ನಾಶಕ್ಕಾಗಿಯೇ ನಾನು ಬೇಟೆಗೆ ಹೊರಟುದು? ಕುರುವಿನ ಮೇಲೆ ಬೊಕ್ಕೆ. ಅನಪತ್ಯ ದುಃಖದಿಂದ ಮೊದಲೇ ಪರಿತಪಿಸುತ್ತಿರುವೆ. ಈಗ ಈ ಪಶ್ಚಾತ್ತಾಪ ಬೇರೆ ಬಂದು ಸೇರಿ ನನ್ನನ್ನು ದಹಿಸುತ್ತಿದೆ. ಇದಕ್ಕೆ ಪ್ರಾಯಶ್ಚಿತ್ತವನ್ನು ಕಾಣೆನಲ್ಲಾ!

ಸು—ಮಹಾರಾಜಾ! ಇನ್ನು ವಿಷಾದಿಸಿ ಫಲವಿಲ್ಲ. ಕುಮಾರನು ಇದೋ ಮೃತನಾಗಿರುವನು. ನಾನು ಇವನ ದೇಹವನ್ನು ಕಾದಿರುವೆನು. ನೀನು ಈತನ ತಂದೆ ತಾಯಿಗಳನ್ನು ಕಂಡು ಸತ್ಯವನ್ನು ಹೇಳು. ತೃಷೆ ಯಿಂದ ಬಳಲಿರುವ ಅವರಿಗೆ ನೀರನ್ನು ಕೊಡು (ದೀನರಾಗಾಲಾಪ. ಅರೆನಿಮಿಷದ ಮೇಲೆ).

ಋಷಿ—ಮಗ ತಾಂಡವ, ಎಷ್ಟು ಹೊತ್ತಾಯಿತು ಹೋಗಿ.

ಋ. ಪ—ಅಯ್ಯೋ, ಮಗನಿಗೇನಾದರೂ ಆಪತ್ತುಂಟಾಯಿತೇ? ಅಥವಾ ದಾರಿ ತಪ್ಪಿತೇ?

ಋ—ಹಾ! ನನ್ನ ಗಂಟಲು ಸುಡುತ್ತಿದೆ. ತಾಂಡವನು ಕಾಣು ವುದಿಲ್ಲ. ತಾಂಡವಾ! ಮಗೂ, ತಾಂಡವಾ.

ಋ. ಪ.—ಒಬ್ಬನೇ ಹೋಗ ಬೇಡವೆಂದು ಎಷ್ಟು ಸಲ ಹೇಳಿದೆ ನಾನು. ನೀರು ಕುಡಿಯದಿರುತ್ತಿದ್ದರೂ ಚಿಂತೆಯಿರಲಿಲ್ಲ. ನನ್ನ ಮಗನು ಸಮೀಪದಲ್ಲಿರುತ್ತಿದ್ದರೆ ಸಾಕಾಗುತ್ತಿತ್ತು. ಪುತ್ರ ದರ್ಶನದ ದಾಹ ವಲ್ಲವೆ ಬಹಳ ದೊಡ್ಡದು.

ಋ—ಸ್ವಲ್ಪ ಕಿವಿಗೊಟ್ಟು ಕೇಳು. ಅವನ ಕಾಲ ಸಪ್ಪಳಲ್ಲವೆ ಕೇಳಿಸುತ್ತಿರುವುದು.

ಋ. ಪ.—ಹಾ! ದೈವವೇ! ಬರುತ್ತಿರುವನು. ನನ್ನ ಮುದ್ದು ಕಂದ. ಅದೋ, ಕೊಡದಲ್ಲಿ ನೀರು ಅಲೆಯುವ ಸಜ್ಜು ಕೇಳಿಸುತ್ತದೆ!

ಋ- ಬರಲಿ! ಅವನಿಗೆ ಸ್ವಲ್ಪ ಬುದ್ಧಿ ಹೇಳಬೇಕಾಗಿದೆ. ಇನ್ನು ಮೇಲೆ ಎಷ್ಟು ಅಗತ್ಯವಿದ್ದರೂ ಅವನನ್ನು ಇಂತಹ ಸಮಯದಲ್ಲಿ ಕಳು ಹಿಸಬಾರದು.

ಋ. ಪ.—ಒಳ್ಳೆಯಕತೆ! ಯಾರಾದರೂ ಅವನನ್ನು ಕಳುಹಿಸಿ ದರೆ? ತನ್ನಿಷ್ಟದಿಂದಲೇ ಅವನು ಹೋಗಿರುವನು, ದಯಮಾಡಿ ಅವನ ಮೇಲೆ ಕೋಪಿಸಬೇಡಿ. ಅವನಿಗೆ ಸಂಕಟವುಂಟು ಮಾಡಬೇಡಿ.

ಋ—ತಾಂಡವ, ಎಷ್ಟು ಹೊತ್ತಾಯಿತು ನೀನು ನೀರು ತರುತ್ತೇ ನೆಂದು ಹೇಳಿ ಹೊರಟು ಹೋಗಿ, ದಾಹದಿಂದ ಬೇಯುತ್ತಿರುವವರ ಕಷ್ಟ ನಿನಗೆ ತಿಳಿಯದೆಂದು ತೋರುತ್ತದೆ!

ಋ. ಪ.— ಹಾಗೆ ಹೇಳಬೇಡಿ! ನಮ್ಮ ಕಷ್ಟ ತಿಳಿದು ತಾನೆ ಈ ನಡುವಿರುಳಲ್ಲಿ ಕಗ್ಗತ್ತಲು ಕವಿದ ಕಾಡಿನಲ್ಲಿ ಅವನು ಒಬ್ಬನೇ ಹೋದುದು ನೀರು ತರುವುದಕ್ಕೇಂದು?

ಋ—ಆದರೂ ಹೋಗಿ ಎಷ್ಟು ಹೊತ್ತಾಯಿತು! ಹೂಂ! ಹೂಂ! ನೀರನ್ನು ಅಲ್ಲಿಡು ದಾಹವನ್ನು ಪರಿಹರಿಸಿ ಇನ್ನು ಮಾತು. ಎಲ್ಲಿ ತಾಂಡವಾ! ನೀರು ಕೊಡು ನಮಗೆ!

ಋ. ಪ.—ನೋಡಿದಿರಾ, ನಾನು ಮೊದಲೇ ಹೇಳಲಿಲ್ಲವೇ ಅವ

ನನ್ನ ಸಂಕಟಕ್ಕೆ ಗುರಿ ಮಾಡಬೇಡಿರೆಂದು ಹತ್ತಿರ ಬಂದೂ ಮಾತಾಡದಿರುವುದನ್ನು ನೋಡಿದಿರಲ್ಲವೇ? ಇದು ನೀವು ಗದರಿಸಿದುದರ ಪರಿಣಾಮ. ನಮಗೆ ಇವನೊಬ್ಬನೇ ಮಗನಲ್ಲವೇ? ಹೀಗೆ ಯಾಕೆ ಅವನನ್ನು ಬೇಸರಪಡಿಸಬೇಕು (ದಶರಥ ನೀರನ್ನು ಕೊಡುವನು )

ಋ—ಇದೋ, ಈ ನೀರನ್ನು ನಾನು ಕುಡಿಯುವೆನು. ಆ ಮೇಲೆ ಮಾತು. ನಿನಗೂ ಕೊಟ್ಟನಲ್ಲವೇ? ನೀನೂ ಕುಡಿ.

ಋ. ಪ.—ಇಲ್ಲ! ನನ್ನ ಕಂದನು ಮಾತಾಡದಿದ್ದರೆ ನಾನು ಈ ನೀರನ್ನು ಕುಡಿಯುವುದಿಲ್ಲ.

ಋ – ಮಗೂ, ತಾಂಡವಾ, ನೀನು ಯಾಕೆ ಮಾತಾಡುವುದಿಲ್ಲ. ನಾನು ಗದರಿಸಿದೆನೆಂದು ಕೋಪವೇ?

ಋ. ಪ.—ಮತ್ತೆ ಕೋಪಿಸದಿರುವನೇ? ನಮ್ಮ ಸೇವೆ ಮಾಡುವುದು ಬೇರೆ, ನಮ್ಮ ಬೈಗಳನ್ನು ಕೇಳುವುದು ಬೇರೆ ಮಗೂ, ಅಪ್ಪನೊಡನೆ ಮಾತಾಡುವುದು ಬೇಡ, ನನ್ನೊಡನೆ ಮಾತಾಡು ಇಲ್ಲಿಗೆ ಬಾ.

ದ—ಅಮ್ಮಾ, ಕ್ಷಮಿಸು—

ಋಷಿ ದಂಪತಿಗಳು – ಏ, ಏನು, ತಾಂಡವನಲ್ಲವೇ? ಯಾರದು?

ದ.—ಕ್ಷಮಿಸಬೇಕು. ತಾಂಡವನು....ತಾಂಡವನು....

ಋ—ಏನು? ನಮ್ಮ ಕುವರನು ಏನಾದ? ನೀನು ಯಾರು? ಬೇಗ ಹೇಳು.

ದ—ನಾನು....ನಾನು....ಒಬ್ಬ ಶಾಪಗ್ರಸ್ತನಾದ ಕ್ಷತ್ರಿಯಾಧಮನು! ನಿಮ್ಮ ಪುತ್ರನು ಚೀಲದಲ್ಲಿ ನೀರನ್ನು ತುಂಬಿಸುತ್ತಿದ್ದನು. ಆಗ ಉಂಟಾದ ಗುಳುಗಳು ನಿನಾದವನ್ನು ಕೇಳಿದ ನಾನು, ಕಾಡು ಹಂದಿ ನೀರು ಕುಡಿಯುವುದೆಂದೆಣಿಸಿ ಶರವನ್ನು ಬಿಟ್ಟೆನ್ನು—

ಇಬ್ಬರೂ—ಹಾ! ದೈವವೇ! ನಮ್ಮನ್ನು ವಂಚಿಸಿದೆಯಾ? ರಾಜ, ಹೇಳು, ಹೇಳು, ತಾಂಡವನಿಗೆ ಏನಾಯಿತೆಂದು ಹೇಳು ಬೇಗ.

ದ— ಇನ್ನು ದುಃಖಮಾಡಿ ಪ್ರಯೋಜನವಿಲ್ಲ. ಕಾರ್ಯವು

ಮಿಂಚಿಹೋಯಿತು. ಇದಕ್ಕೆ ತಕ್ಕ ಪ್ರಾಯಶ್ಚಿತ್ತವನ್ನು ಅನುಭವಿಸು ವುದಕ್ಕೆ ಇದೋ, ಸಿದ್ಧನಾಗಿರುವೆನು. ಈ ಪಾತಕಿಯನ್ನು ಕ್ಷಮಿಸ—

ಋ—(ಕೋಪದಿಂದ) ಏನು ಹೇಳುವಿ? ಕ್ಷಮಿಸಬೇಕೆಂದೊ? ನಾವಿಬ್ಬರೂ ಕ್ಷಮಿಸಬೇಕೆಂದೊ? ಪುತ್ರಮರಣಕ್ಕೆ ಕಾರಣನಾದವನನ್ನು ಕ್ಷಮಿಸಬೇಕೆಂದೊ? ಕೊಲೆಪಾತಕಿಯನ್ನು ಕ್ಷಮಿಸಬೇಕೆಂದೊ? ಎಲೆ ರಾಜನೆ! ನಿನಗೆ ಪುತ್ರರಿಲ್ಲದಿರಬೇಕು; ಅಥವಾ ನೀನು ಪುತ್ರವಿರಹ ದುಃಖವನ್ನು ಅನುಭವಿಸಲಿಲ್ಲವೆಂದು ತೋರುವುದು. ಆದ್ದರಿಂದಲೇ ಹೀಗೆ ಕ್ಷಮಿಸಬೇಕು ಸಹಿಸಬೇಕು, ಎಂದು ಹೃದಯ ಶೂನ್ಯನಂತೆ ಒದರುತ್ತಿರುವೆ!

ದ—ನಾನು ಅಪರಾಧಿ, ಯಾವ ಶಿಕ್ಷೆಗೂ ಸಿದ್ಧನಿದ್ದೇನೆ. ಈ ಮಹಾಪಾಪಕ್ಕೆ ತಕ್ಕ ಪ್ರಾಯಶ್ಚಿತ್ತವಾಗಲಿ! ಅರಿಯದೆ ಮಾಡಿದ ಅಪ ರಾಧವಿದು. ಮತ್ತೂ ಮತ್ತೂ ಅದನ್ನೇ ಹೇಳಬೇಕಾಗಿದೆ. ಸೂರ್ಯ ವಂಶದ ಅರಸು ತಿಳಿದು ಒಂದು ಅಪರಾಧವನ್ನು ಇದು ವರೆಗೂ ಮಾಡಿ ದುದಿಲ್ಲ.

ಋ—ಇದೋ, ನೋಡಲಿಲ್ಲವೇ ಪುತ್ರಶೋಕದ ಅವಸ್ಥೆಯನ್ನು. ಅಂದೆಯಾದ ಈ ಪೂಜ್ಯೆಯು ಪುತ್ರವಿರಹವನ್ನು ಸಹಿಸಲಾರದೆ ಇದೊ ಮೂರ್ಛೆಹೊಂದಿ ಇಲ್ಲಿ ಬಿದ್ದಿರುವಳು. ನನ್ನ ಹೃದಯವಾದರೋ ದುಃಖದಿಂದ ಬಿರಿಯುತ್ತಿರುವುದು. ಈ ಸ್ಥಿತಿಯು ನಮಗೆ ಯಾರಿಂ ದಾಯಿತು? ಆ ಶರ ನಿನ್ನ ಕೈಯಲ್ಲಿಲ್ಲವೇ? ನಾವು ನಿನ್ನನ್ನು ಶಪಿಸದಿರು ವೆವು, ಆ ನಿಶಿತ ಶರದಿಂದ ಈ ಅಸುಗಳನ್ನು ತೊಲಗಿಸು! ಹೂಂ! ಬೇಗ ನಾವು ನಮ್ಮ ತಾಂಡವನೊಡನೆ ಸೇರುವೆವು, ಹೂಂ! ಯಾಕೆ ಮಾತಾ ಡದಿರುವಿ? ಬೇಗ, ಬೇಗ!

ದ—ಋಷಿಗಳೆ, ಶಾಂತರಾಗಿರಿ! ತಿಳಿದೂ ನಾನು ಪಾಪಕೃತ್ಯವ ನ್ನಾಚರಿಸಬೇಕೆ? ನನ್ನಿಂದಾಗದು, ಈಶ್ವರ ತುಲ್ಯರಾದ ನಿಮ್ಮ ಮೇಲೆ ನಾನು ಅಂಬೆಸೆಯಲಾರೆನು. ನನ್ನ ತಪ್ಪಿಗೆ ಎಂತಹ ಪ್ರಾಯಶ್ಚಿತ್ತವ ನ್ನಾದರೂ ಅನುಭವಿಸಲು ಸಿದ್ಧನಿರುವೆನು. ತಾಂಡವನಂತೆಯೇ ನಿಮ್ಮ ಸೇವೆಯಲ್ಲಿ ನಿರತನಾಗಿರುವೆನು!

ಋ — ಬೇಡ, ಬೇಡ! ನಮಗಿನ್ನು ಬದುಕುವ ಆಶೆಯಿಲ್ಲ. ನಮಗೆ ನೀರುಕೊಡುವ ಮಗನು ನಿನ್ನಿಂದ ಹತನಾದ ಮೇಲೆ ನಿನ್ನ ಕೈಯಿಂದ ನೀರು ಕುಡಿದು ಬದುಕಬೇಕೆ? ಬೇಡ ಆ ಜೀವನಕ್ಕೆ ಧಿಕ್ಕಾರವಿರಲಿ! ನಿನಗೂ ಸುತವಿಯೋಗದಿಂದ ಮರಣವುಂಟಾಗಲಿ! ಇದೇ ನಿನ್ನ ತಪ್ಪಿಗೆ ಪ್ರಾಯಶ್ಚಿತ್ತ! ನಾವು ಸುರನಿಳಯದಲ್ಲಿ ಪುತ್ರರತ್ನವನ್ನು ಅರಸುವುದಕ್ಕಾಗಿ ಇದೋ ಹೊರಟೆವು!

(ಎಲ್ಲರೂ ಹೋಗುವರು)

ಸಮಾಪ್ತಂ

---

# ಮೃಗಯಾ ವಿನೋದ

## ದೃಶ್ಯ ೧

[ಆಶ್ರಮ, ಮಂಗಲ ಪ್ರಭಾತ, ಪಕ್ಷಿಗಳ ಮಧುರ ಧ್ವನಿ]

ಮುನಿ—ಪ್ರಿಯೆ, ನಾವು ಮಾತ್ರವೇ ಅಲ್ಲ, ಈ ಕಾಡಿನ ಸೊಬಗಿಗೆ ಸೋತವರು! ಚಕ್ರವರ್ತಿಯಾದ ಪಾಂಡು ರಾಜನೂ ರಾಜ್ಯ ಭೋಗಗಳನ್ನು ಬಿಟ್ಟು ಈ ವನದಲ್ಲಿ ನೆಲಸುವುದಕ್ಕಾಗಿ ಬಂದಿರುವನು.

ಮುನಿ ಪತ್ನಿ—ಪ್ರಿಯನೆ, ಆತನಾರು? ಏತಕ್ಕಾಗಿ ಇಲ್ಲಿಗೆ ಬಂದಿರುವನು?

ಮು—ಭದ್ರೆ, ಆತನು ಹಸ್ತಿನಾವತಿಯ ದೊರೆ, ರಾಜ್ಯ ಭೋಗದಲ್ಲಿ ಸುಖವನ್ನು ಕಾಣದೆ, ನಗರವಾಸದಿಂದ ಬೇಸತ್ತು, ಶಾಂತಿ ವಿಶ್ರಾಂತಿಗಳನ್ನು ಪಡೆಯುವುದಕ್ಕಾಗಿ, ತನ್ನ ರಾಣಿಯರಾದ ಕುಂತಿ ಮಾದ್ರಿಯರೊಡಗೂಡಿ ಇಲ್ಲಿಗೆ ಬಂದಿರುವನು.

ಮು. ಪ—ಅವನ ರಾಣಿಯರೂ ಬಂದಿರುವರೇ?

ಮುನಿ—ಬಾರದಿರುವರೇ? ಅವನ ಪಡಿನೆಳಲಂತಿರುವ ಅವರು ಅವನನ್ನು ಬಿಟ್ಟು ಇರುವರೇ? ಮಾತ್ರವಲ್ಲ. ಇಂತಹ ರಮಣೀಯವಾದ ಪ್ರದೇಶಗಳನ್ನು ನೋಡುವುದಕ್ಕೆ ಯಾರಿಗೆ ತಾನೆ ಆಸೆಯುಂಟಾಗಲಿಕ್ಕಿಲ್ಲ.

ಮು. ಪ.—ಪ್ರಿಯ, ಎಷ್ಟಾದರೂ ರಾಜ್ಯ ಭೋಗವನ್ನು ಅನುಭವಿಸಿದವರಲ್ಲವೇ, ಈ ಕಾಡಿನಲ್ಲಿ ಅವರು ಹೇಗೆ ಜೀವಿಸಬಲ್ಲರು?

ಮು—ಹಾಗೆನ್ನಬೇಡ! ಅರಮನೆಯಲ್ಲಿ ಯಾವಾಗಲೂ ಸುಖವೇ ಇದೆಯೆಂದು ತಿಳಿದಿರುವೆಯಾ? ಕೆಲವು ವೇಳೆ ಅರಮನೆಗಿಂತಲು ಅರಣ್ಯವೇ ಲೇಸೆನಿಸುವುದು. ಮತ್ಸರಿಗಳ ಸಹವಾಸಕ್ಕಿಂತ ಕಾಡಿನ ಏಕಾಂತವಾಸವು ಸುಖಕರವಲ್ಲವೇ?

ಮು. ಪ.—ಅದು ನಿಜ. ಅದಕ್ಕಾಗಿ ಅಲ್ಲವೇ ನಾವೂ ನಾಡನ
ಬಿಟ್ಟು ಕಾಡಿಗೆ ಬಂದಿರುವುದು. ಆದರೆ ಇವರಿಗೆ ಯಾರಿಂದ ತೊಂ
ಯುಂಟಾಯಿತು?

ಮು— ಬೇರೆ ಯಾರಿಂದ? ಆ ಗಾಂಧಾರೀ ದೇವಿಯೊಬ್ಬ
ಸಾಕಲ್ಲವೆ.

ಮು. ಪ—ಸರಿ. ಸರಿ! ಎಲ್ಲಿಯೂ ಹೆಂಗಸರದ್ದೇ ಕಿರುಕುಳ! ಗಂ
ಸರೆಲ್ಲರೂ ಸಾಕ್ಷಾತ್ ದೇವಸ್ವರೂಪರೇ!

ಮು—ಪ್ರಿಯೆ, ಹಾಗೆನ್ನಬೇಡ. ಹೆಂಗಸರಲ್ಲಿಯೂ ಒಳ್ಳೆಯ
ರಿದ್ದಾರೆ; ಗಂಡಸರಲ್ಲಿ ಕೆಟ್ಟವರೂ ಇದ್ದಾರೆ. ನೋಡು, ಈ ಪಾಂ
ರಾಜನ ಮಡದಿಯರು ಸುಶಿಕ್ಷಿತರೂ, ಸುಗುಣಸಂಪನ್ನರೂ, ಸಾ
ಯರೂ ಆಗಿದ್ದಾರೆ. ಆತನೂ ಬಹಳ ಪರಾಕ್ರಮಿ; ತ್ಯಾಗಶಾಲಿ. ಆದ
ಮೃಗಯಾ ವ್ಯಸನವೊಂದು ಅವನನ್ನು ಬೆಂಬತ್ತಿ ಬಂದಿದೆ.

ಮು. ಪ.—ಇರಲಿ, ಅದರಿಂದ ನಮಗೇನು ಚಿಂತೆ?

ಮು—ನೋಡಿದೆಯಾ, ಆಗಲೇ ಎಲ್ಲವನ್ನು ಮರೆತು ಬಿಟ್ಟೆ. ಇದ್ದ
ಇರಬೇಕು ನಿನ್ನಂಥವರು! ನೀನಲ್ಲವೇ ನನ್ನೊಡನೆ ಹೇಳಿದವಳು ಯಾರ
ದರೂ ಮೃಗ ಬೇಟೆಗೆ ಬಂದರೆ ನಮ್ಮ ಆಶ್ರಮದ ಮೃಗಗಳಿಗೆ ತೊಂದ
ಯಾಗುವುದೆಂದು!

ಮು. ಪ.—ಹೌದು, ಹೌದು, ಬೇಟೆಗಾರರ ಹೆದರಿಕೆಯಿಂದಾ
ಅವುಗಳ ಸ್ವೇಚ್ಛಾವಿಹಾರಕ್ಕೆ ತಡೆಯಾಗಿದೆ. ನನಗಂತೂ ಅವು ದೂ
ಹೋಗದಂತೆ ನೋಡಿಕೊಳ್ಳುವುದೇ ಕೆಲಸವಾಗಿದೆ. ಕೆಲವು ದಿನಗಳ ಹಿಂ
ನೀವು ನದೀ ತೀರಕ್ಕೆ ಹೋಗಿರುವಾಗ ಬೇಡರ ತಂಡವೊಂದು ಆಶ್ರಮ
ಸಮೀಪಕ್ಕೆ ಬಂದಿತು. ಆಗ ನಮ್ಮ ಮುದ್ದು ಹರಿಣಶಾಬವು ಎಷ
ಹೆದರಿಕೊಂಡಿತು!

ಮು—ಹೌದು, ಅವುಗಳ ಸ್ವಭಾವವೇ ಅಂತಹುದು. ನಿಮ್ಮಂತೆ
ಬಹಳ ಮೃದುಸ್ವಭಾವ ಭೀರುಗಳು. ಸ್ವಲ್ಪ ಹೆದರಿದರೂ ಸಾಕು
ದೇಹವೆಲ್ಲ ನಡುಗಲಾರಂಭಿಸುತ್ತದೆ. ಕಿವಿಗಳನ್ನು ನಿಗುರಿಸಿ, ಕತ್ತೆತ್ತಿ
ಸುತ್ತಲೂ ನೋಡುತ್ತವೆ ತಿಂಡಿ ತಿನ್ನುವುದಿಲ್ಲ. ಬಾಲ ಮುರುಟಿ

ಕೊಂಡು ಓಟಕ್ಕಾರಂಭಿಸುತ್ತವೆ.

ಮು. ಪ.—ಆ ರಾಜನನ್ನು ಕಂಡು ನಮ್ಮ ಮೃಗಗಳಿಗೆ ಹಿಂಸೆ ಮಾಡಬಾರದೆಂದು ಕೇಳಿಕೊಳ್ಳಬೇಕು. ಅವನ ರಾಣಿಯರನ್ನೂ ನೋಡುವ ಆಸೆಯಾಗಿದೆ.

ಮು—ಅದಕ್ಕೇನು? ಅವರನ್ನೇ ಇಲ್ಲಿಗೆ ಬರಮಾಡಿದರಾಯಿತು. ನಾನು ಸ್ನಾನ ಮಾಡಿಕೊಂಡು ಬರುವೆನು. ಪೂಜೆಗೆ ಅನುಗೊಳಿಸು. (ಹೋಗುವನು).

(ವನಪ್ರದೇಶ, ಪಾಂಡುರಾಜನು ಕುಂತಿ ಮಾದ್ರಿಯರೊಡನೆ ಪ್ರವೇಶಿಸುವನು).

ಪಾಂಡು—ಆಹಾ! ಈ ಕಾಡಿಗೆ ಬಂದುದರಿಂದ ನಾನು ಧನ್ಯನಾದೆನು. ಇಲ್ಲಿ ಎತ್ತ ನೋಡಿದರೂ ಶಾಂತಿ ಸಾಮ್ರಾಜ್ಯವೇ ಹರಡಿಕೊಂಡಿದೆ. ಪ್ರಜೆಗಳ ದುಃಖಯಾತನೆಗಳು ಇಲ್ಲಿ ಕಾಣುವುದಕ್ಕೆ ಸಿಗುವಂತಿಲ್ಲ. ಆಶ್ರಮವಾಸಿಗಳೆಲ್ಲರೂ ನಿತ್ಯತೃಪ್ತರು. ಆದುದರಿಂದ ನಾನು ನನ್ನಿಷ್ಟಕ್ಕೆ ಮೃಗಯಾ ವಿನೋದದಲ್ಲಿ ಕಾಲ ಕಳೆಯುತ್ತಿರಬಹುದು!

ಕುಂತಿ—ಪ್ರಿಯ, ಹೌದು ಇಲ್ಲಿಯ ಜನರಿಗೆ ಕಪಟವೆಂಬುದೇನೆಂದು ಗೊತ್ತಿಲ್ಲ. ಅವರು ಸ್ನೇಹಶೀಲರಾಗಿದ್ದಾರೆ. ನಾವು ಬಂದು ಹೆಚ್ಚು ದಿವಸವಾಗಿರದಿದ್ದರೂ ಅವರಿಗೆ ನಮ್ಮಲ್ಲಿ ಎಷ್ಟು ಪ್ರೀತಿಯುಂಟಾಗಿದೆ? ನಿಜವಾಗಿಯೂ ನಾವು ಧನ್ಯರೇ ಸರಿ!

ಪಾಂಡು—ಪ್ರಿಯೆ, ಅರಸುತನವನ್ನು ಬಿಟ್ಟುಕೊಟ್ಟು ಬಂದಿರುವೆನೆಂದು ನನಗೆ ಸ್ವಲ್ಪವೂ ಯೋಚನೆಯಿಲ್ಲ. ಇಂತಹ ಸಾಧು ಸಂತರ ಸಖ್ಯವು ಲಭಿಸಿದ ಮೇಲೆ ಇನ್ನೇನು ಬೇಕು ನಮಗೆ? ಈ ಕಾಡು ನಾಡಿನಿಂದ ಹಲವು ಪಡಿ ಮಿಗಿಲು!

ಮಾದ್ರಿ—ರಮಣ! ಆ ಮಾತು ಸತ್ಯ. ಈ ಆನಂದ ಸಾಮ್ರಾಜ್ಯಕ್ಕಿಂತಲೂ ಹೆಚ್ಚಿನದೇನುಂಟು? ಕಲಕಲನಿನಾದದಿಂದ ಹರಿಯುತ್ತಿರುವ ವನನದಿಯೇ ವಂದಿಮಾಗಧರಾಗಿರುವಾಗ, ಸಂತೋಷಚಿತ್ತವುಳ್ಳ ಮೃಗಪಕ್ಷಿಗಳೇ ಪ್ರಜೆಗಳಿರುವಾಗ, ಬಳ್ಳಿ ಮಾಡವೇ ಒಡ್ಡೋಲಗವಾಗಿರುವಾಗ, ಈ ಅರಸುತನಕ್ಕೆ ಸರಿಯಾವುದು? ಕೋಗಿಲೆಯು

ಪುಂಗಳಗೀತದಿಂದ ನಮ್ಮನ್ನು ಸ್ವಾಗತಿಸುತ್ತದೆ; ಕುಸುಮಗಳು ಕಾಣಿಕೆಯನ್ನೊಪ್ಪಿಸುತ್ತವೆ. ಸೃಷ್ಟಿಯು ಸಂತೋಷದಿಂದ ಹುಚ್ಚೆದ್ದು ಕುಣಿಯುವಂತಿದೆ.

ಪಾಂಡು—ಹೌದು, ನೀನು ಹೇಳಿದುದೆಲ್ಲವೂ ಸತ್ಯ. ಆದರೆ ನನಗೊಂದು ಸಂಶಯವಿದೆ. ಅದನ್ನು ಹೇಳಲ್ಯೆ? ಅಥವಾ ಬೇಡ. ಇನ್ನು ಆ ಪ್ರಸ್ತಾಪವನ್ನೆತ್ತಿ ಪ್ರಯೋಜನವಿಲ್ಲ.

ಮಾದ್ರಿ—ಅದೇನು ಸಂಶಯ? ಅಗತ್ಯವಾಗಿಯೂ ಹೇಳಬೇಕು. ಅವನ್ನು ಪರಿಪರಿಸಿಕೊಂಡರೆ ಮಾತ್ರವೇ ಮನಸ್ಸಿಗೆ ನೆಮ್ಮದಿಯುಂಟಾಗುವುದು, ಹೇಳೋಣಾಗಲಿ!

ಪಾಂಡು—ಮತ್ತೇನೂ ಇಲ್ಲ. ನೀನಿನ್ನೂ ಚಿಕ್ಕ ಪ್ರಾಯದವಳು ಯೌವನದ ಸುಗ್ಗಿಯಲ್ಲಿ ಮೆರೆಯುತ್ತಿರುವವಳು, ಅರಮನೆಯ ಸುಖವನ್ನೇ ಉಂಡವಳು. ಕಷ್ಟವನ್ನರಿಯದವಳು. ಈ ಆಶ್ರಮ ಜೀವನವು ನಿನಗೆ ಒಪ್ಪುತ್ತದೆಯೋ ಇಲ್ಲವೋ ಎಂದು ಮನಸ್ಸು ಶಂಕಿಸುತ್ತದೆ!

ಮಾದ್ರಿ—ಪ್ರಿಯನೇ, ಇದೆಂತಹ ಮಾತು? ಪತಿಯ ಸನ್ನಿಧಿಯಲ್ಲಿದ್ದರೆ ಸತಿಗೆ ಸ್ವರ್ಗವೆಂಬುದನ್ನು ನಾನರಿಯದವಳೇ? ನೀವಿಲ್ಲದಿದ್ದರೆ ರಾಜ್ಯಭೋಗಗಳಿಂದೇನು? ಅಷ್ಟೈಶ್ವರ್ಯದಿಂದೇನು?

ಪಾಂಡು—ಸರಿ! ಹಾಗಾದರೆ ನಾನು ಧನ್ಯನೆ? ಪ್ರಿಯೆ, ಕುಂತಿ, ಅದೋ ನೋಡು, ಆ ಪರ್ವತದ ಶಿಖರವು ಎಷ್ಟು ಶುಭ್ರವಾಗಿ ಶೋಭಿಸುತ್ತಿದೆ! ಮಹಾತ್ಮರ ಕೀರ್ತಿಯು ಕೂಡ ಹೀಗೆಯೇ ಧವಳ ವರ್ಣದಿಂದ ಶೋಭಿಸುವುದಲ್ಲವೇ?

ಕುಂತಿ—ಹೌದು, ಅಷ್ಟು ಮಾತ್ರವಲ್ಲ; ಹಸುರು ಮೆಲ್ಪಾಸಿನಿಂದ ಶೋಭಿಸುತ್ತಿರುವ ಈ ಸಮಪ್ರದೇಶವನ್ನು ಕಂಡು, ಸುಖ ದುಃಖಗಳನ್ನು ಸಮವೆಂದು ತಿಳಿಯುವ ಸಮದರ್ಶಿಗಳ ನೆನಪಾಯಿತು ನನಗೆ!

ಮಾದ್ರಿ—ಅಕ್ಕಾ, ಈ ನೈಸರ್ಗಿಕ ಲತಾಮಂಟಪವನ್ನು ನೋಡು! ಎಷ್ಟು ಮನೋಹರವಾಗಿದೆ. ಇದನ್ನು ನೋಡಿ ನನ್ನ ಮನಸ್ಸು ಆನಂದದಿಂದ ತುಂಬಿ ಹೋಗಿರುವುದು. ನನ್ನ ಆಯುಷ್ಯದಲ್ಲಿ ಈ ಸಮಯವೇ ಅತ್ಯಂತ ಊರ್ಜಿತ ಭಾಗವೆಂದು ತಿಳಿಯುವೆನು. ಇಂತಹ ರಮಣೀಯ

ಪ್ರದೇಶಗಳಲ್ಲಿದ್ದರೆ ಯಾವ ತರದ ದುಃಖವೂ ಮನಸ್ಸಿಗೆ ತಟ್ಟುವಂತಿಲ್ಲ.

ಕುಂತಿ—ಒಂದು ವೇಳೆ ತಟ್ಟಿದರೂ. ಅದು ಮನಸ್ಸಿನಲ್ಲಿ ಬಹು ಕಾಲ ಇರುವಂತಿಲ್ಲ.

ಪಾಂಡು—ಸರಿ! ನೀವು ಇಲ್ಲೇ ಸ್ವಲ್ಪ ಹೊತ್ತು ವಿಶ್ರಮಿಸುತ್ತ ಕಾಲ ಕಳೆಯಿರಿ. ನಾನು ಇಲ್ಲಿಯೇ ಸ್ವಲ್ಪ ಸಮಯ ಬೇಟೆಯಾಡಿ ಬರುವೆನು.

ಕುಂತಿ—ಮಹಾರಾಜ! ಈ ಸ್ಥಳದಲ್ಲಿ ಬೇಟೆಯೇ? ಅದರಲ್ಲಿಯೂ ಒಬ್ಬರೇ ಹೋಗುವುದೇ? ಬೇಡ, ನನಗೇಕೋ ಭಯವಾಗುತ್ತಿದೆ.

ಪಾಂಡು—ಛೆ! ಏನು ಭಯ? ಇಲ್ಲಿ ಭಯಕ್ಕೇನೂ ಆಸ್ಪದವಿಲ್ಲ. ಮಾತ್ರವಲ್ಲದೆ ನನ್ನ ಕೈಯಲ್ಲಿ ಬಿಲ್ಲು ಬಾಣಗಳಿರುವ ವರೆಗೂ ನನಗೆ ಯಾವ ಅಪಾಯವೂ ಉಂಟಾಗಲಾರದು.

ಮಾದ್ರಿ—ಪ್ರಿಯತಮ, ನೀವಾಗಲೇ ಬಹಳ ದಣಿದಿರುವಿರಿ, ಈಗ ಸ್ವಲ್ಪ ವಿಶ್ರಾಂತಿಯನ್ನು ಪಡೆದು ಮತ್ತೆ ಬೇಟೆಯಾಡಬಹುದಲ್ಲವೇ?

ಪಾಂಡು-ಪ್ರಿಯೆ, ನನಗೆ ಬೇಟೆಯಾಡುವುದರಿಂದಲ್ಲವೇ ವಿಶ್ರಾಂತಿ ಸುಖವು ಲಭಿಸುವುದು! ಆದುದರಿಂದ ನನ್ನನ್ನು ಏತಕ್ಕಾಗಿ ತಡೆಯುವಿರಿ? ನನ್ನ ಮನವೊಂದರೋ ಮೃಗಯಾ ವಿನೋದಕ್ಕಾಗಿ ಹಾತೊರೆಯುತ್ತಿರುವುದು.

ಮಾದ್ರಿ--ಹಾಗಾದರೆ ನಾನು ನಿಮ್ಮೊಡನೆ ಬರಲೇ?

ಪಾಂಡು—ಸರಿ, ಸರಿ! ನೀನು ಜೊತೆಯಲ್ಲಿರುವಾಗ ನಾನು ಬೇಟೆಯಾಡಿದಂತೆಯೇ! ನಿನ್ನ ಅಕ್ಕನ ಜೊತೆಯಲ್ಲಿ ಯಾರಿದ್ದಾರೆ? ಬೇಡ, ನೀವಿಬ್ಬರೂ ಇಲ್ಲಿಯೇ ಇರಬೇಕು. ನಾನು ಬೇಗನೆ ಬರುವೆನು.

ಇಬ್ಬರೂ—ಸರಿ! ಇನ್ನು ನಾವು ಪ್ರತಿ ಮಾತಾಡುವುದಿಲ್ಲ. ಆದರೆ ಜೋಕೆ! ಮೋಸ ಹೋಗಬೇಡಿರಿ! ಬೇಗನೆ ಬರಬೇಕು.

ಪಾಂಡು—ಆಗಲಿ. ಬೇಗನೇ ಬರುವೆನು.

### ದೃಶ್ಯ ೩

(ವನಾಂತರ. ಮುನಿ ದಂಪತಿಗಳ ಪ್ರವೇಶ)

ಮುನಿ—ಪ್ರಿಯೆ, ನಾಡಜೀವನದಲ್ಲಿ ಸಾರವಿಲ್ಲವೆಂದು ಕಾಡಿಗೆ

ಬಂದುದಾಯಿತು. ಇಲ್ಲಿ ಒಂದು ವಿಧದಲ್ಲಿ ಮನಸ್ಸಿಗೆ ನೆಮ್ಮದಿಯುಂಟಾಗಿದೆ. ಈ ವನ ಶೋಭೆಯನ್ನು ನೋಡು. ಇಲ್ಲಿರುವ ಶಾಂತಿ ಮತ್ತೆಲ್ಲಿಯೂ ದೊರೆಯಲಾರದು ಆದರೂ ಮನಸ್ಸು ಯಾವುದೋ ಒಂದು ಸಂಕಟಕ್ಕೆ ಗುರಿಯಾಗಿದೆ.

ಮುನಿಪತ್ನಿ-ಪ್ರಿಯತಮ, ಈ ಸೃಷ್ಟಿ ಸೌಂದರ್ಯವನ್ನು ನೋಡಿ ನನ್ನ ಮನಸ್ಸಿನಲ್ಲಿ ಆಶ್ರಮ ವಿರುದ್ಧವಾದ ವಿಕಾರಗಳು ತಲೆ ದೋರುತ್ತಿವೆ. ಭುವನ ಮನೋಹರವಾದ ಮಧುಮಾಸ ಪ್ರಾಪ್ತವಾಗಿದೆ. ಬಗೆ ಬಗೆಯ ಪುಷ್ಪಗಳು ಅರಳಿವೆ. ತುಂಬಿ ಕೋಗಿಲೆಗಳು ಧ್ವನಿಗೈಯುತ್ತಿವೆ. ತಂಗಾಳಿ ಬೀಸುತ್ತಿದೆ.......

ಮುನಿ— ಪ್ರಿಯೆ, ಸಾಕು ಈ ನಿನ್ನ ವರ್ಣನೆ! ಈಗ ತಿಳಿದೆ ನಿನ್ನ ಮನೋವೇದನೆ ಯಾವುದೆಂದು, ನಾಡನ್ನು ಬಿಟ್ಟು ಬಂದರೂ ಅಲ್ಲಿಯ ವಾಸನಾ ವಿಶೇಷಗಳನ್ನು ನಿನ್ನ ಮನಸ್ಸು ಪೂರ್ಣವಾಗಿ ಬಿಟ್ಟಿಲ್ಲ. ಇದಕ್ಕಿನ್ನೇನು ಗತಿಯೋ?

ಮು. ಪ.- ಪ್ರಿಯ, ಈ ಕಾಡಿನ ಚಿಗರೆಗಳು ತಮ್ಮ ಮರಿಗಳೊಡನೆ ಎಷ್ಟು ಸಂತೋಷದಿಂದ ನಲಿದಾಡುತ್ತಿವೆ! ಜೀವಿಗಳೆಲ್ಲಾ ಒಂದೇ ರೀತಿಯಾಗಿವೆಯಲ್ಲವೇ? ಇವುಗಳನ್ನು ನೋಡುವಾಗ ಇವು ಮಕ್ಕಳಿಲ್ಲದ ನಮ್ಮನ್ನು ಹಾಸ್ಯಮಾಡುವಂತೆ ತೋರುತ್ತವೆ.

ಮುನಿ -ಪ್ರಿಯೆ, ಹೌದು, ಪುತ್ರರಿಲ್ಲದಿದ್ದರೆ ಗತಿಯಿಲ್ಲ. ಇದು ಶಾಸ್ತ್ರ ವಚನ! ಈ ಪ್ರಾಣಿಗಳನ್ನು ದೂರಿ ಫಲವಿಲ್ಲ. ಮಕ್ಕಳನ್ನು ಪಡೆಯುವ ಭಾಗ್ಯವನ್ನು ನಾವು ಪಡೆದುಕೊಂಡು ಬಂದಿಲ್ಲ.

ಮುನಿ ಪತ್ನಿ—ಪ್ರಿಯ, ನನ್ನ ಮನಸ್ಸಿನಲ್ಲೇನೋ ವಿಚಿತ್ರವಾದ ಭಾವನೆಗಳು ತಲೆ ದೋರುತ್ತಿವೆ. ನನ್ನ ಚಿತ್ತದಲ್ಲಿ ಉಂಟಾಗಿರತಕ್ಕ ವಿಕಾರವನ್ನು ನಿಮ್ಮೊಡನಲ್ಲದೆ ಬೇರೆಯಾರೊಡನೆ ಹೇಳಲಿ? ಅದನ್ನರಿತು ಅದಕ್ಕೆ ಬೇಕಾದ ನಿವೃತ್ತಿ ಮಾರ್ಗವನ್ನು ಹುಡುಕಬೇಕೆಂದು ಪ್ರಾರ್ಥಿಸುತ್ತೇನೆ.

ಮುನಿ—ಏನು? ನಿನ್ನ ಯೋಚನೆಯೇನು?

ಮು. ಪ—ಮತ್ತೇನೂ ಇಲ್ಲ. ಈ ಮೃಗಗಳಂತೆಯೇ ಆನಂದ

ಸಾಗರದಲ್ಲಿ ತೇಲಾಡುತ್ತಿರಬೇಕೆಂದು ಆಸೆಯುಂಟಾಗಿದೆ!

ಮುನಿ—ಹಾ! ದೈವವೇ! ಇಂದ್ರಿಯುವನು ಬಿಗಿ ಹಿಡಿದು, ಜೀವನನು ಜಗ್ಗಿಸುತ, ಭಾವವನು ಕುಗ್ಗಿಸುತ, ಪಾಡು ಪಟ್ಟದ್ದಾಯಿತು. ಆದರೂ ಪೂರ್ವ ವಾಸನೆ ನನ್ನನ್ನೂ ಬಿಟ್ಟು ಹೋಗಿಲ್ಲ. ಈ ಆಸೆಗೆ ಅದನ್ನು ಪೂರೈಸುವುದೇ ಔಷಧ! ಪ್ರಿಯೆ ಆಗಲಿ. ನಿನ್ನಿಷ್ಟದಂತೆ. ಇದೋ ನನ್ನ ತಪೋಬಲದಿಂದ ನಿನ್ನ ಅಪೇಕ್ಷೆಯನ್ನು ತೀರಿಸುವೆನು (ಹರಿಣ ಹರಿಣಿಯರಾಗಿ ಬೆರೆಯುವರು.)

(ದೂರದಲ್ಲಿ ಪಾಂಡುರಾಜನು ಪ್ರವೇಶಿಸುತ್ತ)

ಪಾಂಡು—ಒಂದು ಮೃಗವೂ ನನ್ನ ದೃಷ್ಟಿಗೆ ಬೀಳಲಿಲ್ಲ ಒಂದು ಮೃಗವನ್ನಾದರೂ ಹೊಡೆಯದೆ ಹಿಂದಿರುಗುವುದಕ್ಕೆ ಮನಸ್ಸು ಒಪ್ಪದು, ಏನು ಮಾಡಲಿ! (ದೂರದಲ್ಲಿ ಹರಿಣ ಮಿಥುನವನ್ನು ಕಂಡು) ಓಹೋ, ನಾನು ಧನ್ಯನು! ಅದೋ, ಕೊಳ್ಳಿಗಳು ಕಾಣಿಸಿಕೊಂಡಿವೆ. ಅವು ತಪ್ಪಿಸಿಕೊಂಡು ಹೋಗುವ ಮೊದಲೇ ಬಾಣವನ್ನೆಸೆಯುವೆನು (ಬಾಣ ಪ್ರಯೋಗದ ಶಬ್ದ, ಮೃಗ ಬೀಳುವ ಶಬ್ದ. ಮುನಿಯು ಯಾತನೆಯಿಂದ ನರಳುತ್ತಿರುವನು, ಪತ್ನಿ ಮಡಿದಿರುವಳು.)

ಪಾಂಡು—(ಸಮೀಪಿಸಿ) ಇದೇನಾಶ್ಚರ್ಯ! ನಾನು ಜಿಂಕೆಗಳಿಗೆ ಬಾಣವೆಸೆದರೆ ಮುನಿದಂಪತಿಗಳು ಹೀಗೆ ಮರಣೋನ್ಮುಖರಾಗಿ ಕೆಡೆದು ಬಿದ್ದಿರುವರಲ್ಲಾ! (ಇನ್ನೂ ಹತ್ತಿರ ಹೋಗಿ) ಸ್ವಾಮಿ, ಅಪರಾಧವನ್ನು ಕ್ಷಮಿಸಬೇಕು ಅರಿಯದೆ ಮಾಡಿದ ತಪ್ಪು!

ಮು—ದುಷ್ಟ! ಕ್ಷಮಿಸಬೇಕೆ? ಆಗಲಿ. ನಿನ್ನನ್ನು ಈಗಲೇ ದಹಿಸಿಬಿಡಬಹುದಾಗಿತ್ತು! ಆದರೆ ಹಾಗೆ ಮಾಡುವುದಿಲ್ಲ. ಸಾಧ್ವೀ ಶಿರೋಮಣಿಗಳಾದ ನಿನ್ನ ರಾಣಿಯರಿಗೆ ವೈಧವ್ಯವನ್ನು ತರುವುದಿಲ್ಲ. ಆದರೆ—

ಪಾಂಡು—ಮುನಿಶ್ರೇಷ್ಠ! ತಿಳಿಯದೆ ಮಾಡಿದ ಅಪರಾಧ! ನಾನು ಮತ್ತೂ ಮತ್ತೂ ಹೇಳಬೇಕಾಗಿದೆ ಇದಕ್ಕೆ ಯಾವ ಶಿಕ್ಷೆಯನ್ನು ಕೊಡುತ್ತೀರೋ ಅದನ್ನು ಅನುಭವಿಸಲಿಕ್ಕೆ ಸಿದ್ಧನಾಗಿರುವೆನು.

ಮು—ಧೂರ್ತ! ನಿನಗೆ ಯಾವ ಶಿಕ್ಷೆ ಕೊಡಲಿ? ಅಲ್ಲಿ ನೋಡು. ಆ ಸ್ವಾಧಿಯನ್ನು! ಸಂತಾನಾರ್ಥವಾಗಿ ರಮಿಸಲಿಚ್ಛಿಸಿ ಈ ಗತಿಯನ್ನು ಹೊಂದಿದಳು. ಅವಳ ಪ್ರಾಣಪಕ್ಷಿಯು ನಿನ್ನ ಬಾಣಕ್ಕೆ ಆಹುತಿಯಾಯಿತು. ನಾನು ನಿನಗೆ ಶಾಪಕೊಡುವುದಕ್ಕಾಗಿ ಮಾತ್ರ ಉಸಿರೊಡಗೂಡಿರುವೆನು ಹಿಡಿ ಶಾಪವನ್ನು! ನಿನ್ನ ಪತ್ನಿಯರ ಸಂಗಸುಖವನ್ನು ನೀನು ಮಾಡಿದರೆ ನಿನಗೆ ಮರಣವುಂಟಾಗಲಿ!

ಪಾಂಡು—ತಾಪಸವರ್ಯ, ಪುತ್ರ ಮುಖದರ್ಶನ ಇನ್ನೂ ಆಗಿಲ್ಲ. ನನ್ನಲ್ಲಿ ಅನುಗ್ರಹ ಮಾಡಬೇಕು.

ಮುನಿ—ಇನ್ನು ಬೇರೆ ಮಾತಿಲ್ಲ. ಇದೋ ನಾನು ಹೊರಟೆ ನನ್ನ ಪ್ರಿಯೆಯನ್ನು ಸ್ವರ್ಗದಲ್ಲಿ ಸೇರುವುದಕ್ಕೆ! (ಮಡಿಯುವನು).

ಪಾಂಡು—ಶಿವ ಶಿವ! ಇನ್ನೇನು ಗತಿ! (ಹೋಗುವನು.)

---

ನಿಮ್ಮಷ್ಟಕ್ಕೆ ನೀವೇ ಇಂಗ್ಲಿಷ್ ಕಲಿಯಬೇಕೆಂದಿದ್ದರೆ—
ವ್ಯಾಕರಣಬದ್ಧವಾಗಿ ಇಂಗ್ಲಿಷ್ ಮಾತಾಡಬೇಕೆಂದಿದ್ದರೆ—
25 ವರುಷಗಳ ಅನುಭವ ಪರಿಶ್ರಮದಿಂದ ಬರೆದಿರುವ—
ದಿ| ಶ್ರೀ. ಕೊರಡ್ಕಲ್ ಶ್ರೀನಿವಾಸರಾಯರಿಂದ ವಿರಚಿತವಾದ—

# ಸುಲಭದಲ್ಲಿ ಇಂಗ್ಲಿಷ್

**[ENGLISH MADE EASY]**

ಯನ್ನು ಇಂದೇ ತರಿಸಿಕೊಳ್ಳಿರಿ

ಬೆಲೆ:- ಸಾಧಾರಣ ಪ್ರತಿ- ರೂ. ೧-೮-೦. (ಟಪ್ಪಾಲು ಖರ್ಚು ಬೇರೆ)
ಉತ್ತಮ ಪ್ರತಿ - ರೂ. ೨—೦—೦ (ಟಪ್ಪಾಲು ಖರ್ಚು ಬೇರೆ)

ಪ್ರತಿಗಳು ಸಿಗುವ ಸ್ಥಳ:

ನವಭಾರತ ಪುಸ್ತಕ ಭಂಡಾರ, ಉಡುಪಿ.

Edited, Printed & Published by K. H. Shetty
at Navayuga Press, Udipi
(Date of delivery from the Press 16—7—1955)